ಲಿಖಿತ ಮೂಲಕ ಉತ್ತರಿಸುವ ಪ್ರಶ್ನೆ



**ಕರ್ನಾಟಕ ವಿಧಾನ ಪರಿಷತ್ತು**
ನೂರ ನಲವತ್ತೆರಡನೆಯ ಅಧಿವೇಶನ
ಸೋಮವಾರ, ದಿನಾಂಕ: 14ನೇ ಡಿಸೆಂಬರ್, 2020

ಉನ್ನತ ಶಿಕ್ಷಣ ಇಲಾಖೆಯ ಕಾಲೇಜುಗಳ ಪ್ರಾರಂಭ ಮಾಡುವ ಬಗ್ಗೆ

ಶ್ರೀ ಹೆಚ್.ಎಂ. ರಮೇಶ ಗೌಡ (ವಿಧಾನಸಭೆಯಿಂದ ಚುನಾಯಿತರಾದವರು) :-

578(643) ಮಾನ್ಯ ಉಪ ಮುಖ್ಯಮಂತ್ರಿಗಳು ಹಾಗೂ ಉನ್ನತ ಶಿಕ್ಷಣ, ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ ಹಾಗೂ ವಿಜ್ಞಾನ ಮತ್ತು ತಂತ್ರಜ್ಞಾನ ಹಾಗೂ ಕೌಶಲ್ಯಾಭಿವೃದ್ಧಿ ಉದ್ಯಮಶೀಲತೆ ಮತ್ತು ಜೀವನೋಪಾಯ ಸಚಿವರು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ:-

(ಅ) ರಾಜ್ಯದಲ್ಲಿ ಕಾಲೇಜುಗಳು ಮರು ಆರಂಭವಾಗಿದ್ದು ಎಷ್ಟು ಕಾಲೇಜುಗಳು ಕಾರ್ಯಾರಂಭ ಮಾಡಿವೆ; ಎಷ್ಟು ವಿದ್ಯಾರ್ಥಿಗಳ ದಾಖಲಾತಿ ಆಗಿದೆ; (ವಿವರ ನೀಡುವುದು)

(ಆ) ನವೆಂಬರ್ 17 ರಂದು ಪದವಿ ಮತ್ತು ಉನ್ನತ ಪದವಿ ಕಾಲೇಜುಗಳ ಮರು ಆರಂಭದ ಸರ್ಕಾರದ ಆದೇಶಕ್ಕೂ ಮೊದಲೇ ರಾಜ್ಯದ ಕೆಲವು ಕಾಲೇಜುಗಳು ಆರಂಭಿಸಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಬಂದಿದ್ದಲ್ಲಿ, ಆ ಕಾಲೇಜುಗಳ ವಿರುದ್ಧ ಯಾವ ಕ್ರಮ ಕೈಗೊಳ್ಳಲಾಗಿದೆ ;

(ಇ) ಕಾಲೇಜುಗಳ ವಿದ್ಯಾರ್ಥಿ ಮತ್ತು ಬೋಧಕ ಸಿಬ್ಬಂದಿಗಳಿಗೆ ರ್ಯಾಪಿಡ್ ಆ್ಯಂಟಿಜನ್, ಆರ್.ಟಿ.ಪಿ.ಸಿ.ಆರ್ ಅನ್ನು ಸೂಕ್ತವಾಗಿ ನಡೆಸಲಾಗಿದೆಯೇ; (ಮಾಹಿತಿ ನೀಡುವುದು)

(ಈ) ರಾಜ್ಯದ ತಾಲ್ಲೂಕು ಕೇಂದ್ರಗಳ ಎಷ್ಟು ಕಾಲೇಜುಗಳು ಈಗಾಗಲೇ ಕಾರ್ಯಾಚರಣೆ ಆರಂಭಿಸಿವೆ; (ವಿವರ ನೀಡುವುದು)

(ಉ) ತಾಲ್ಲೂಕು ಕೇಂದ್ರಗಳ ಕಾಲೇಜುಗಳ ಸ್ಯಾನಿಟೈಸೇಷನ್‌ಗೆ ವೆಚ್ಚವಾಗಿರುವ ಹಣವೆಷ್ಟು; ಕಾಲೇಜುಗಳಲ್ಲಿ ಥರ್ಮಲ್ ಸ್ಕ್ಯಾನಿಂಗ್ ವ್ಯವಸ್ಥೆ ಸಮರ್ಪಕವಾಗಿದೆಯೇ? (ಮಾಹಿತಿ ನೀಡುವುದು)